ಡಾ॥ ಎಚ್. ಎಸ್. ಗೋಪಾಲರಾವ್*

# ಜಲಗಾರದಿಬ್ಬದ ಶಾಸನ : ಒಂದು ಪುನರಧ್ಯಯನ

೧೯-೨-೧೯೭೮ರ ಭಾನುವಾರದ ಸಾಪ್ತಾಹಿಕ ಪುರವಣಿಯಲ್ಲಿ 'ಪ್ರಜಾವಾಣಿ' ಪತ್ರಿಕೆ ಪ್ರಕಟಿಸಿದ ನನ್ನ ಲೇಖನ 'ಹಲ್ಮಿಡಿಗಿಂತ ಹಿಂದಿನ ಜಲಗಾರದಿಬ್ಬದ ಶಾಸನ ?' ವು ವಿದ್ವಾಂಸರ ಗಮನ ಸೆಳೆಯಿತು. ಹಲವು ಶಾಸನತಜ್ಞರು ಮತ್ತು ವಿದ್ವಾಂಸರು ಜಲಗಾರದಿಬ್ಬದ ಶಾಸನದ ಬಗೆಗೆ ಆಸಕ್ತಿ ವಹಿಸಿದರು. ಫಲವಾಗಿ 'ಪ್ರಜಾವಾಣಿ' ಪತ್ರಿಕೆಯ ಮೂಲಕವೇ ೧೯-೩-೧೯೭೮ ಭಾನುವಾರದ ಸಾಪ್ತಾಹಿಕ ಪುರವಣಿಯಲ್ಲಿ ಡಾ॥ ಬಾ.ರಾ. ಗೋಪಾಲ್ ಮತ್ತು ಎಂ. ಹನುಮಂತರಾವ್ ಅವರ 'ಜಲಗಾರದಿಬ್ಬ ಶಾಸನ–ಹೊಸ ಬೆಳಕು' ಲೇಖನ ಪ್ರಕಟವಾಯಿತು. ಜಲಗಾರದಿಬ್ಬ ಶಾಸನವು ಗಂಗವಂಶದ ಮೂರನೆಯ ಮಾಧವನ ಕಾಲಕ್ಕೆ ಸೇರಿದ್ದೆಂದೂ. ಅದರ ಕ್ರಿ. ಶ. ಸುಮಾರು ೪೫೦ಕ್ಕೆ ಸರಿಹೊಂದುತ್ತದೆಂದೂ ಅಭಿಪ್ರಾಯ ವ್ಯಕ್ತಪಡಿಸಿದ್ದ ನಾನು, ಆ ವರೆಗೆ ಕನ್ನಡದ ಮೊದಲ ಶಾಸನವೆಂದು ಪರಿಗಣಿತವಾಗಿದ್ದ ಹಲ್ಮಿಡಿಯ ಶಾಸನದ ಕಾಲ ಕ್ರಿ. ಶ. ಸು. ೪೫೦ ಎಂದು ಬಹುತೇಕ ವಿದ್ವಾಂಸರ ಅಭಿಪ್ರಾಯವಾಗಿದ್ದುದರಿಂದ, ಜಲಗಾರದಿಬ್ಬದ ಶಾಸನವು ಕನ್ನಡದ ಮೊದಲ ಶಾಸನವೆಂದು ಸ್ವೀಕರಿಸಬಹುದೆಂಬ ಅನುಮಾನವನ್ನು ಪ್ರಕಟಿಸಿದ್ದೆ. ನಾನು ಓದಿದ್ದ ಶಾಸನದ ಪಾಠವನ್ನು ಬಹುತೇಕ ಒಪ್ಪಿಕೊಂಡಿದ್ದ ಡಾ॥ ಬಾ. ರಾ. ಗೋಪಾಲ್ ಮತ್ತು ಎಂ. ಹನುಮಂತರಾಯರು, ಶಾಸನವು ಗಂಗ ವಂಶದ ಶ್ರೀವಿಕ್ರಮನ ಕಾಲಕ್ಕೆ ಸೇರಿದ್ದೆಂದೂ ಅದರ ಕಾಲವು ಕ್ರಿ. ಶ. ೭ನೆಯ ಶತಮಾನದ ಪೂರ್ವಾರ್ಧಕ್ಕೆ ಸೇರುವುದೆಂದೂ ನಿರ್ಧರಿಸಿದ್ದರು. ೧೯೭೮ರ ಮಾರ್ಚ್ ತಿಂಗಳ 'ಪುಸ್ತಕ ಪುರವಣಿ' (ಸಂಪುಟ ೨, ಸಂಚಿಕೆ ೩) ಯಲ್ಲಿ ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರಿ ಅವರು 'ವಿವಾದಗ್ರಸ್ತ ಜಲಗಾರದಿಬ್ಬದ ಶಾಸನ' ಎಂಬ ಶೀರ್ಷಿಕೆಯಡಿಯಲ್ಲಿ ಲೇಖನ ಬರೆದು ಶಾಸನದ ಭಾಷೆಯ ಬಗೆಗೆ ವಿಶ್ಲೇಷಿಸಿ, ಅದು ಕ್ರಿ. ಶ. ೯ನೆಯ ಶತಮಾನಕ್ಕೆ ಹಿಂದಿನ ಭಾಷೆ ಎಂದು ಸೂಚಿಸಿದರು. ಅನಂತರ ಜಲಗಾರದಿಬ್ಬದ ಶಾಸನದ ಬಗೆಗೆ ಯಾವುದೇ ಲೇಖನಗಳು ಪ್ರಕಟವಾಗಲಿಲ್ಲ. ಆದರೆ ಆ ಬಗೆಗಿನ ಕುತೂಹಲ ಮತ್ತು ಆಸಕ್ತಿ ಉಳಿದೇ ಇದ್ದವು.

ಶಾಸನದ ಪಾಠ ಮತ್ತು ಲಿಪಿಸ್ವರೂಪದ ಬಗೆಗೆ ಉಳಿದಿದ್ದ ಅನುಮಾನಗಳನ್ನು ಬಗೆಹರಿಸಿ, ಶಾಸನದ ಕಾಲವನ್ನು ನಿರ್ಧರಿಸುವುದರ ಸಲುವಾಗಿ ನಾನು ನನ್ನ ಗುರುಗಳಾದ ಡಾ॥ ಬಾ. ರಾ. ಗೋಪಾಲ್ ಅವರನ್ನೇ ಆಶ್ರಯಿಸಿದೆ. ಶಾಸನದ ಪಾಠದ ಕೆಲವು ಭಾಗಗಳು ಮತ್ತು ಅವುಗಳ ಅರ್ಥಸ್ವಾರಸ್ಯವನ್ನು ಕುರಿತಾಗಿ ನನಗೆ ಅನುಮಾನಗಳಿದ್ದವು. ಈ ಹಿನ್ನೆಲೆಯಲ್ಲಿ ೧೯೯೮ರಲ್ಲಿ ಡಾ॥ ಬಾ. ರಾ. ಗೋಪಾಲ್ ಮತ್ತು ನಾನು ಮತ್ತೊಮ್ಮೆ ಜಲಗಾರದಿಬ್ಬದ ಶಾಸನವನ್ನು ರಕ್ಷಿಸಿಟ್ಟಿದ್ದ ಮುಳುಕುಂಟೆಗೆ ಹೋಗಿ, ಶಾಸನದ ಪಡಿಯಚ್ಚುಗಳನ್ನು ಪಡೆದೆವು. ಆ ನಂತರದ ಅಭಿಪ್ರಾಯಗಳನ್ನು ಈಗ ದಾಖಲಿಸಲಾಗುತ್ತಿದೆ.

* ಸ್ವಸ್ತಿಶ್ರೀ ಸ್ಕಂದ, ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ-೫೬೨೧೨೩

### ಶಾಸನದ ಪರಿಷ್ಕೃತ ಪಾಠ

೧. ಸ್ವಸ್ತಿಶ್ರೀ ವಿಕ್ರಮರಾ(ಳೆ)[1]
೨. ಪೃಥುವೀಯಾನಾ ಮಾಧವ
೩. ಗೆಲ್ಲೆ[2] ಕಮಜುಗ[3] ಈರಿ
೪. ದಾನೋಂ[4] ಪಲ್ಮಡಿಯರು[5] [ ]
೫. (ಎ)[6]ಮ್ಮೆಯರು ಪಡೆದದು ಪೊನ್ನಿ
೬. ಡುಕ್ಕೆಪಟಿ ಎಟ್ಟಿಪತ್ತೆರ್ಕ್ಕಂ
೭. ಮರಿಯಾದಿಪಸ[7]ಲ್ಲೊಕ್ಕಳ್ಳದ
೮. ದುಂ ಅಂಮೆಸುಂಕಾ[8]

### ಶಾಸನದ ಆಶಯ

ಶ್ರೀವಿಕ್ರಮನು ರಾಜ್ಯಭಾರ ಮಾಡುತ್ತಿದ್ದಾಗ ಮಾಧವ ಗೆದ್ದ. ಹೋರಾಟದಲ್ಲಿ ಕಮಜುಗ ಎನ್ನುವವನು ಇರಿದ. ಪಲ್ಮಡಿಯರ ಎಮ್ಮೆಯರು ಪೊನ್ನಿಡುಕ್ಕಿ ೭೦ಕ್ಕೆ ಮರ್ಯಾದೆಯನ್ನು ಪಡೆದರು. ಆದರಲ್ಲಿ ಅಂಮೆಸುಂಕವನ್ನು ಹೊರತುಪಡಿಸಲಾಗಿದೆ.

### ಪುನರಧ್ಯಯನ

ಶಾಸನದ ಮೊದಲ ಸಾಲಿನ ಶ್ರೀವಿಕ್ರಮ ರಾ(ಳೆ) ಎಂಬಲ್ಲಿ 'ಳೆ'ಯು ಅಸ್ಪಷ್ಟವಾಗಿದೆ. ಅದು ಒತ್ತಕ್ಷರ 'ಜ' ಕೂಡಾ ಆಗಿರುವ ಸಾಧ್ಯತೆ ಇದೆ. ಕಲ್ಲಿನಲ್ಲಿ ಆ ಅಕ್ಷರವಿರುವ ಭಾಗ ಒಡೆದು ಹೋಗಿದೆ. ಇತ್ತೀಚೆಗೆ ಪಾಠವನ್ನು ಪರಿಷ್ಕರಿಸಿದಾಗ ಶ್ರೀ ವಿಕ್ರಮರಾ(ಳೆ) ಎಂದೇ ಸ್ವೀಕರಿಸಿರುವುದರಿಂದ ಶಾಸನವು ಗಂಗ ಶ್ರೀವಿಕ್ರಮನ ಕಾಲದ್ದೆಂದು ನಿರ್ಧರಿಸಲು ಸಾಧ್ಯವಾಗಿದೆ. ಮಾಧವ ಗೆಲ್ಲೆ ಎಂದು ಈಗಲೂ ಸ್ವೀಕರಿಸಿರುವ ಪಾಠವನ್ನು ಡಾ|| ಬಾ. ರಾ. ಗೋಪಾಲ್ ಮತ್ತು ಎಂ. ಹನುಮಂತ ರಾಯರು 'ಮಾಧವಗಲ್ಲ' ಎಂದು ಓದಿ, ಅದು ಒಂದು ಊರಿನ ಹೆಸರು ಎಂದು ನಿರ್ಧರಿಸಿದ್ದರು. ಆದರೆ 'ಗೆಲ್ಲೆ' ಎಂದು ಬರಹ ಸ್ಪಷ್ಟವಾಗಿರುವುದರಿಂದ, ಅದನ್ನು ಕ್ರಿಯಾ ರೂಪದಲ್ಲೇ ಸ್ವೀಕರಿಸುವುದು ಸೂಕ್ತ. ಮಾಧವ ಎಂಬುವವನು ಗೆದ್ದಾಗ, ಎಂಬಲ್ಲಿ ಹಿಂದೆ ಮಾಧವನನ್ನು ಮೂರನೆಯ ಮಾಧವನೆಂದು ಭಾವಿಸಲಾಗಿತ್ತು. ಆದರೆ ಈಗ ಮತ್ತಾರೋ ಒಬ್ಬ ವೀರ ಅಥವಾ ಮುಖ್ಯಸ್ಥನನ್ನು ಸೂಚಿಸುತ್ತದೆ ಎಂದು ತಿಳಿಯಲಾಗಿದೆ.

ಮಾಧವ ಗೆದ್ದ ಯುದ್ಧದಲ್ಲಿ ಬಹುತೇಕ ಹೋರಾಡಿದವರಲ್ಲಿ ಮುಖ್ಯನಾದವನು ಕಮಜುಗ ಎಂಬ ವ್ಯಕ್ತಿ ; ಅವನು ಪೊನ್ನಿಡುಕಿಗೆ ಸೇರಿದವನಾಗಿರಬೇಕು. ಕಮಜುಗ ಹೋರಾಡಿದ ನೆನಪಿಗೆ ಪೊನ್ನಿಡುಕಿಯ ಎಮ್ಮೆಯರು ಪಡೆದ ಮರಿಯಾದೆ ಅಂಮೆಸುಂಕದ ವಿನಹ ಉಳಿದ ಸುಂಕಗಳ ವಿನಾಯಿತಿ.

ಅಂಮೆಸುಂಕವನ್ನು ಈ ಹಿಂದೆ ಅಮೆಯಸುಂಕ ಅಥವಾ ಬೇಯಿಸದ ಆಹಾರ ಪದಾರ್ಥಗಳ ಅಂದರೆ ದವಸ-ಧಾನ್ಯಗಳ ಮೇಲಿನ ಸುಂಕ ಎಂದು ಭಾವಿಸಲಾಗಿತ್ತು. ಡಾ|| ಬಾ. ರಾ. ಗೋಪಾಲ್ ಅವರು ಅಮುಸುಕಾ ಎಂಬುದು ಅರಸನಿಗೆ ಸಲ್ಲಬೇಕಾದ ಸುಂಕವೆಂಬ ಅಭಿಪ್ರಾಯದಿಂದ ಅಂತಹ ಸುಂಕವನ್ನು ಎತ್ತುವ ಅಧಿಕಾರಿ ಅಮುಸುಕಾರ ಎಂದಿದ್ದರು. ಆದರೆ ಇಬ್ಬರೂ ಖಚಿತ ಅರ್ಥವನ್ನು ನೀಡಿರಲಿಲ್ಲ. ಬ್ರಾಹ್ಮಣರು ಮಾಡುವ ಶ್ರಾದ್ಧ ಕರ್ಮಗಳಲ್ಲಿ ಆಮಶ್ರಾದ್ಧ ಎಂಬುದೊಂದು ಇದೆ. ಅಲ್ಲಿ ಯಾವ ವಸ್ತುವನ್ನೂ ಬೇಯಿಸುವುದಿಲ್ಲ. ಅಕ್ಕಿ, ತರಕಾರಿ ಎಲ್ಲವನ್ನೂ ಹಸಿಯಾಗಿಯೇ ಬಡಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ 'ಅಂಮೆ'ಯು ತರಕಾರಿಗಳನ್ನು ಸೂಚಿಸಬಹುದೆಂದೂ, ಆದ್ದರಿಂದ ಅಂಮೆಸುಂಕವು ತರಕಾರಿಗಳ ಮೇಲಿನ ಸುಂಕವೆಂದೂ ನಿರ್ಧರಿಸಬಹುದಾಗಿದೆ.

---

1 ಮೊದಲು ನಾನು (ಜ್ಯ) ಎಂದು ಓದಿದ್ದೆ ; ಡಾ|| ಬಾ. ರಾ. ಗೋಪಾಲ್ ಅವರು ('ಳೆ') ಎಂದೇ ಓದಿದ್ದರು.
2 ಡಾ|| ಬಾ. ರಾ. ಗೋಪಾಲ ಅವರು 'ಗಲ್ಲ' ಎಂದು ಓದಿದ್ದರು.
3 'ಜು' ಎಂದು ನಾನೂ 'ಜು' ಎಂದೂ ಡಾ|| ಬಾ. ರಾ. ಗೋಪಾಲ ಅವರೂ ಓದಿದ್ದೆವು.
4 ನನ್ನ ಪಾಠ ದಾ [.] : ಡಾ|| ಬಾ. ರಾ. ಗೋ ಅವರ ಪಾಠ ದೊಹ
5 ನನ್ನ ಪಾಠ [-] : ಡಾ|| ಬಾ. ರಾ. ಗೋ ಅವರ ಪಾಠ [ರ]
6 ನನ್ನ ಪಾಠ 'ಜೆ' : ಡಾ|| ಬಾ. ರಾ. ಗೋ ಅವರ ಪಾಠ ಎ
7 ಸಾಲಿನ ಕೆಳಗೆ ಒತ್ತಕ್ಷರದ ಭಾಗವಿದೆ. ಹಿಂದೆ ಇಬ್ಬರೂ ಗಮನಿಸಿರಲಿಲ್ಲ.
8 ಡಾ|| ಬಾ. ರಾ. ಗೋ ಅವರು ಅಮೆಸುಕಾ ಎಂದು ಓದಿದ್ದರು.

ಮೆಳೇಕೋಟೆ ತಾಮ್ರಶಾಸನದ ಲಿಪಿ ಸ್ವರೂಪದೊಡನೆ ಹೋಲಿಸಿ, ಈ ಶಾಸನದ ಕಾಲವನ್ನು ಕ್ರಿ. ಶ. ಸು. ೪ನೆಯ ಶತಮಾನಕ್ಕೆ ಕೊನೆಯ ಭಾಗ (ಕ್ರಿ. ಶ. ಸು. ೩೯೦) ಎಂದು ನಾನು ಸೂಚಿಸಿದ್ದೆ. ಡಾ|| ಬಾ. ರಾ. ಗೋಪಾಲ್ ಅವರು ಲಿಪಿಸ್ವರೂಪದ ಆಧಾರದ ಮೇಲೆಯೇ ಶಾಸನವು ಕ್ರಿ. ಶ. ೭ನೆಯ ಶತಮಾನದೆಂದು ಸೂಚಿಸಿದ್ದರು ಹಾಗೂ ಇದುವರೆಗೆ ದೊರೆತಿರುವ ಶ್ರೀವಿಕ್ರಮನ ಶಾಸನವೂ ಇದೊಂದೇ ಎಂದು ತಿಳಿಸಿದ್ದರು. ಶ್ರೀ ವಿಕ್ರಮನ ಮತ್ತೊಂದು ಶಿಲಾಶಾಸನವು ಕೋಲಾರ ಜಿಲ್ಲೆಯ ಶ್ರೀನಿವಾಸಪುರ ತಾಲ್ಲೂಕಿನ ಕಲ್ಲೂರಿನಲ್ಲಿ ದೊರೆತಿದೆ.[9] ಅದೂ ಎಂಟು ಸಾಲಿನ ಶಾಸನ. ಶಾಸನದಸ್ವರೂಪವೂ ಜಲಗಾರದಿಬ್ಬದ ಶಾಸನದ ಸ್ವರೂಪದಂತೆಯೇ ಇದೆ. ಆದರೆ ಬರಹದ ರೂಪ ಒರಟಾಗಿದೆ. ಜಲಗಾರದಿಬ್ಬದ ಶಾಸನದ ನಾಜೂಕು ಕಲ್ಲೂರು ಶಾಸನದಲ್ಲಿಲ್ಲ. ಲಿಪಿಸ್ವರೂಪದಲ್ಲಿ ಅಗಾಧ ವ್ಯತ್ಯಾಸವೇನೂ ಕಾಣುವುದಿಲ್ಲವಾದರೂ ಮೊದಲ ನೋಟಕ್ಕೆ ಇವೆರಡೂ ಸಮಕಾಲೀನವಲ್ಲ ಎನಿಸಿದರೆ ಆಶ್ಚರ್ಯಪಡಬೇಕಾಗಿಲ್ಲ. ಶ್ರೀವಿಕ್ರಮನ ಒಂದು ತಾಮ್ರ ಶಾಸನವು ೧೯೭೫ರಲ್ಲೇ ಮಣ್ಣೆಯಲ್ಲಿ ದೊರೆತಿದೆ. ಈವರೆಗೆ ಶ್ರೀವಿಕ್ರಮನ ಎರಡು ಶಿಲಾಶಾಸನಗಳು ಮತ್ತು ಒಂದು ತಾಮ್ರಶಾಸನ ದೊರೆತಂತಾಗಿದೆ. ಎರಡು ಶಿಲಾಶಾಸನಗಳೂ ವೀರರಿಗೆ ನೀಡಿದ ಗೌರವಗಳ ದಾಖಲೆಗಳೇ ಆಗಿವೆ.

ಜಲಗಾರದಿಬ್ಬ ಶಾಸನದ ಲಿಪಿಸ್ವರೂಪವು ಉತ್ತಮ ಮಾದರಿಯದಾಗಿದೆ. ಎಲ್ಲ ಅಕ್ಷರಗಳ ಬರಹವೂ ಸ್ಫುಟವಾಗಿದೆ. ಆದರೆ ಶಾಸನದ ಬರಹಕ್ಕೆ ಬಳಸಿರುವ ಕಲ್ಲು ಮೆದು ಬೆಣಚುಕಲ್ಲಾದ್ದರಿಂದ ಕೆಲವೆಡೆ ಚಕ್ಕೆ ಎದ್ದು ಅಥವಾ ಅಂಚುಗಳು ಒಡೆದು ಅಕ್ಷರಗಳು ಅಸ್ಫುಟವಾಗಿವೆ. ಶಾಸನವನ್ನು ದಾಖಲಿಸಲೆಂದೇ ಕಲ್ಲನ್ನು ಸಿದ್ಧಗೊಳಿಸಿರುವಂತಿದೆ. (ಕಲ್ಲಿನ ಕೆಳಭಾಗದಲ್ಲಿ ಮೂರು ಉಬ್ಬು ಪಟ್ಟಿಗಳಿವೆ.) ಆದರೆ ಉತ್ತಮ ಗುಣಮಟ್ಟದ ಗಟ್ಟಿ ಕಲ್ಲನ್ನೇಕೆ ಆಯ್ಕೆ ಮಾಡಲಿಲ್ಲವೋ ತಿಳಿಯುವುದಿಲ್ಲ.

ಹಲ್ಮಿಡಿ ಶಾಸನದ ಕಾಲವೂ ಈಗ ಕ್ರಿ. ಶ. ಸು. ೪೫೦ ಎಂದು ಎಲ್ಲ ವಿದ್ವಾಂಸರಿಂದಲೂ ಸ್ವೀಕಾರವಾಗಿಲ್ಲ. ಅದರ ಕಾಲ ಕ್ರಿ. ಶ. ಸು. ೬ನೆಯ ಶತಮಾನವೆಂದು ಡಾ|| ಜಿ. ಎಸ್. ಗಾಯಿ ಅವರೇ ಇತ್ತೀಚೆಗೆ ತಿಳಿಸಿದ್ದರು.

ಜಲಗಾರದಿಬ್ಬ ಮತ್ತು ಕಲ್ಲೂರು ಶಾಸನಗಳ ಲಿಪಿ ಸ್ವರೂಪದ ತೌಲನಿಕ ಅಧ್ಯಯನ ಮಾಡಿದಾಗ, ಬರಹದ ಸ್ವರೂಪವು ಒಂದೇ ಕಾಲದಲ್ಲಿ ಲಿಪಿಕಾರ ಮತ್ತು ಬಳಸುವ ಬರಹದ ವಸ್ತುವನ್ನಾಧರಿಸಿ ಬೇರೆ ಬೇರೆ ಆಗುತ್ತಿದ್ದವು ಎಂದು ಗೋಚರವಾಗುತ್ತದೆ.

'ಸ್ವಸ್ತಿಶ್ರೀ ವಿಕ್ರಮರಾ(ಳೆ)' ಎಂಬ ಓದಿನಿಂದಾಗಿ, ಜಲಗಾರದಿಬ್ಬದ ಶಾಸನದ ಕಾಲವನ್ನು ಗಂಗ ವಂಶದ ಶ್ರೀವಿಕ್ರಮನ ಕಾಲಕ್ಕೆ ಅಂದರೆ ಕ್ರಿ. ಶ. ೬೪೪-೬೭೯ರ ಅವಧಿಗೆ ಸೇರಿಸಬೇಕಾಗುತ್ತದೆ.

ಕಳೆದ ೧೮ ವರ್ಷಗಳ ಅಂತರದಲ್ಲಿ ಶಾಸನದ ಕಲ್ಲು ಮತ್ತಷ್ಟು ಸವೆದು, ಅಕ್ಷರಗಳು ಮತ್ತಷ್ಟು ಅಸ್ಪಷ್ಟವಾಗುತ್ತಿವೆ. ಶಾಸನದ ಪಡಿಯಚ್ಚುಗಳಲ್ಲೇ ಆ ವ್ಯತ್ಯಾಸವನ್ನು ಗುರುತಿಸಬಹುದಾಗಿದೆ.

---

9 ಎಂ. ಎ. ಆರ್. ೧೯೧೬-೧೭, ಪು. ೩೧.